

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1413 |
| ಸದಸ್ಯರ ಹೆಸರು | : | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ |
| ಉತ್ತರಿಸಬೇಕಾದ ದಿನಾಂಕ | : | 09.03.2022 |
| ಉತ್ತರಿಸಬೇಕಾದವರು | : | ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿನ ಗೊಂಡ (ಎಸ್.ಟಿ.) ಸಮುದಾಯದ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸದ ಸಮಯದಲ್ಲಿ ಪರಿಶಿಷ್ಟ ಪಂಗಡ ಪ್ರಮಾಣ ಪತ್ರ ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ರಾಜ್ಯದ ಪರಿಶಿಷ್ಟ ಪಂಗಡದ ಪಟ್ಟಿಯ ಕ್ರಮ ಸಂಖ್ಯೆ: 9ರಲ್ಲಿ Gond, Naikpod, Rajgond ಜಾತಿಗಳು ನಮೂದಾಗಿದ್ದು, ಸದರಿ ಜಾತಿಗಳಿಗೆ ನಿಯಮಾನುಸಾರ ಪರಿಶೀಲಿಸಿ ವಿಚಾರಣೆ ನಡೆಸಿ, ಸಕ್ಷಮ ಪ್ರಾಧಿಕಾರದಿಂದ ಜಾತಿ ಪ್ರಮಾಣ ಪತ್ರವನ್ನು ಪಡೆಯಬಹುದಾಗಿದೆ. ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಹಾಗೂ ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990 ನಿಯಮಗಳು 1992ರನ್ವಯ ನೇಮಕಾತಿ ಆದೇಶ ನೀಡುವ ಮುಂಚೆ ಪರಿಶಿಷ್ಟ ಪಂಗಡದ ಸಿಂಧುತ್ವ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿ ಅಧ್ಯಕ್ಷತೆಯಲ್ಲಿನ ಜಿಲ್ಲಾ ಜಾತಿ ಮತ್ತು ಆದಾಯ ಪರಿಶೀಲನಾ ಸಮಿತಿಯಿಂದ ಜಾತಿ ಪ್ರಮಾಣ ಪತ್ರವನ್ನು ಪಡೆಯಬೇಕಾಗಿದೆ.<br><br>ಸಿಂಧುತ್ವ ಪ್ರಮಾಣ ಪತ್ರಕ್ಕೆ ವಿಳಂಬ ಮಾಡದೇ ಗೊಂಡ ಜಾತಿಯ ನೈಜ ಅಭ್ಯರ್ಥಿಗಳಿಗೆ ನಿಯಮಾನುಸಾರ ಸಿಂಧುತ್ವ ಪ್ರಮಾಣ ಪತ್ರವನ್ನು ನೀಡುವಂತೆ ಈಗಾಗಲೇ ಸುತ್ತೋಲೆ ಸಂಖ್ಯೆ:ಸಕಇ 79 ಎಸ್.ಎಡಿ 2016, ದಿನಾಂಕ:15.04.2017ರ ಸುತ್ತೋಲೆಯಲ್ಲಿ ಸೂಚಿಸಲಾಗಿದೆ. |
| ಆ) | ಬಂದಿದ್ದಲ್ಲಿ, ಸದರಿ ವಿದ್ಯಾರ್ಥಿಗಳು ಸರ್ಕಾರಿ ಸೇವೆಗೆ ಆಯ್ಕೆಯಾದ ಸಂದರ್ಭದಲ್ಲಿ ಪರಿಶಿಷ್ಟ ಪಂಗಡದ ಸಿಂಧುತ್ವ ಪ್ರಮಾಣ ಪತ್ರ ನೀಡದೇ ಅಧಿಕಾರಿಗಳು ಸಿ.ಆರ್.ಇ ಸೇಲ್‌ಗೆ ಕಳುಹಿಸುತ್ತಿರುವುದರಿಂದ ಸರ್ಕಾರಿ ಉದ್ಯೋಗಕ್ಕಾಗಿ ಆಯ್ಕೆಯಾದ ಅಭ್ಯರ್ಥಿಗಳಿಗೆ ವಿಳಂಬದಿಂದ ತುಂಬಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸ್ಪಷ್ಟ ವಿವರ ನೀಡುವುದು. | |
| ಇ) | ಬಂದಿದ್ದಲ್ಲಿ, ಸಿಂಧುತ್ವ ಪ್ರಮಾಣ ಪತ್ರ ತುರ್ತಾಗಿ ನೀಡುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ | ಕೆಲವು ಜಾತಿಗಳ ಹೆಸರಿನಲ್ಲಿ ಅನರ್ಹ ಅಭ್ಯರ್ಥಿಗಳು ಸುಳ್ಳು ಜಾತಿ ಪ್ರಮಾಣ ಪತ್ರಗಳನ್ನು ಪಡೆಯುವುದನ್ನು ತಡೆಗಟ್ಟುವ ನಿಟ್ಟಿನಲ್ಲಿ ಪರಿಶಿಷ್ಟ ಪಂಗಡದ ಜಾತಿಗಳಿಗೆ ಸೇರಿದ ಅಭ್ಯರ್ಥಿಗಳು ಸರ್ಕಾರದ |

| | | |
|---|---|---|
| | ಮಾಹಿತಿ ನೀಡುವುದು) | ಇಲಾಖೆಗಳು/ಸಂಸ್ಥೆಗಳಲ್ಲಿ ನೌಕರಿಗಾಗಿ ಆಯ್ಕೆಯಾಗಿ ಜಾತಿ ಸಿಂಧುತ್ವ ಪ್ರಮಾಣ ಪತ್ರ ಪಡೆಯುವ ಪ್ರಕರಣಗಳಲ್ಲಿ ಅಂತಹವರುಗಳಿಗೆ ಜಿಲ್ಲಾ ಜಾತಿ ಪರಿಶೀಲನಾ ಸಮಿತಿಗಳು ಜಾತಿ ಸಿಂಧುತ್ವ ಪ್ರಮಾಣ ಪತ್ರಗಳನ್ನು ನೀಡುವ ಮೊದಲು ರಾಜ್ಯ ಸರ್ಕಾರದ ಸಂಸ್ಥೆಯಾದ ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ (ಜಾಗೃತ ಕೋಶ) ದಿಂದ ವರದಿ ಪಡೆದು ಸದರಿ ವರದಿಯನ್ನು ಪರಿಶೀಲಿಸಿ, ಜಾತಿ ಸಿಂಧುತ್ವ ಪ್ರಮಾಣ ಪತ್ರಗಳನ್ನು ನೀಡತಕ್ಕದೆಂದು ಸರ್ಕಾರದ ಆದೇಶ ಸಂಖ್ಯೆ:ಸಕಇ 112 ಎಸ್‌ಎಡಿ 2020, ದಿನಾಂಕ:16.01.2021ರಲ್ಲಿಯೂ ಕೂಡ ಸೂಚಿಸಲಾಗಿದೆ. |
| ಈ) | ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಇಲ್ಲಿಯವರೆಗೆ ಸ್ವೀಕರಿಸಿದ ಅರ್ಜಿಗಳೆಷ್ಟು; (ವಿವರ ನೀಡುವುದು) | ಬೀದರ್ ಜಿಲ್ಲೆಯಲ್ಲಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಇಲ್ಲಿಯವರೆಗೆ 74 ಅರ್ಜಿಗಳು ಸ್ವೀಕೃತವಾಗಿರುತ್ತವೆ. |

| ಕ್ರಸಂ | ವಿವರ | ಸಂಖ್ಯೆ |
|---|---|---|
| 1. | ಸ್ವೀಕರಿಸಿದ ಅರ್ಜಿಗಳ ಸಂಖ್ಯೆ | 74 |
| 2. | ಸಿ.ಆರ್.ಇ. ಸೇಲ್ ರವರಿಗೆ ಸಲ್ಲಿಸಿರುವ ಅರ್ಜಿಗಳ ಸಂಖ್ಯೆ | 74 |
| 3. | ವಿತರಿಸಿದ ಸಿಂಧುತ್ವ ಪ್ರಮಾಣ ಪತ್ರ ಸಂಖ್ಯೆ | 6 |
| 4. | ತಿರಸ್ಕರಿಸಿರುವ ಅರ್ಜಿಗಳ ಸಂಖ್ಯೆ | 3 |
| 5. | ವಿಚಾರಣೆ ಹಂತದಲ್ಲಿ ಇರುವ ಅರ್ಜಿಗಳು | 65 |

ಸಕಇ 49 ಎಸ್‌ಎಡಿ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು.